## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 56(166)

ಸದಸ್ಯರ ಹೆಸರು : ಶ್ರೀ ಅರುಣ ಶಹಾಪುರ(ಶಿಕ್ಷಕರ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 01/02/2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ಭಾಷಾ ಅಲ್ಪಸಂಖ್ಯಾತ ಅನುದಾನಿತ ಶಾಲಾ ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಇರುವ ನಿಯಮಾವಳಿಗಳೇನು; ರೋಷ್ಟರ್ ಅನ್ವಯವಾಗುತ್ತದೆಯೇ; ಪ್ರಸ್ತುತ ಭಾಷಾ ಅಲ್ಪ ಸಂಖ್ಯಾತ ಶಾಲಾ ಕಾಲೇಜುಗಳಲ್ಲಿ ಎಷ್ಟು ಹುದ್ದೆಗಳು ಖಾಲಿ ಇವೆ; (ವಿಜಯಪುರ, ಬಾಗಲಕೋಟೆ ಮತ್ತು ಬೆಳಗಾವಿ ಜಿಲ್ಲೆಗಳ ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಇಡಿ 61 ಎಸ್‌ಎಂಸಿ 2009, ದಿನಾಂಕ: 03.09.2010ರ ಆದೇಶದಂತೆ ಭಾಷಾ ಅಲ್ಪ ಸಂಖ್ಯಾತ ಶಿಕ್ಷಣ ಸಂಸ್ಥೆಗಳು ಕಡ್ಡಾಯವಾಗಿ ಮೀಸಲಾತಿ ನಿಯಮಗಳನ್ನು ಪಾಲಿಸತಕ್ಕದ್ದೆಂದು ಸರ್ಕಾರದಿಂದ ಆದೇಶದ ಹೊರಡಿಸಲಾಗಿದೆ. ರೋಸ್ಟರ್ ಅನ್ವಯವಾಗುತ್ತದೆ.<br>ಪ್ರೌಢಶಾಲೆಗಳ ಖಾಲಿ ಹುದ್ದೆಗಳ ವಿವರ:-<br><br>ಕ್ರ.ಸಂ / ಜಿಲ್ಲೆ / ಖಾಲಿ ಹುದ್ದೆಗಳ ಸಂಖ್ಯೆ<br>1. / ವಿಜಯಪುರ / 45<br>2. / ಬಾಗಲಕೋಟೆ / 32<br>3. / ಬೆಳಗಾವಿ / 238<br>4. / ಚಿಕ್ಕೋಡಿ / 26<br><br>ಖಾಲಿ ಹುದ್ದೆಗಳಿಗೆ ಸಂಬಂಧಿಸಿದಂತೆ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಸರ್ಕಾರವು ವಿಧಿಸಿರುವ ಕ್ರಮಗಳು:-<br>1. ಸರ್ಕಾರದ ಆದೇಶದ ಸಂಖ್ಯೆ:ಇಡಿ 16 ಟಿಪಿಯು 2011, ದಿ:30.09.2011ರ ಆದೇಶದಲ್ಲಿ ನಿಗಧಿಪಡಿಸಿದ ಚೆಕ್‌ಲಿಸ್ಟ್ ಅನ್ವಯ ಎಲ್ಲಾ ಮಾನದಂಡಗಳನ್ನು ಪೂರೈಸಿದ ಬಗ್ಗೆ ಪೂರಕ ದೃಢೀಕೃತ ದಾಖಲೆಗಳೊಂದಿಗೆ ಆಯಾಯಾ ಆಡಳಿತ ಮಂಡಳಿಗಳು ಸಂಬಂಧಿಸಿದ ಜಿಲ್ಲಾ ಉಪ ನಿರ್ದೇಶಕರ ಮುಖಾಂತರ ಸಮುಚ್ಚಿತ ಮಾರ್ಗದಲ್ಲಿ ಸೂಕ್ತ ಪ್ರಸ್ತಾವನೆಯನ್ನು ಸಲ್ಲಿಸಬೇಕಾಗುತ್ತದೆ. |

| | | |
|---|---|---|
| | | 2. ಸರ್ಕಾರವು ಹುದ್ದೆ ತುಂಬಲು ಅನುಮತಿ ನೀಡಲು ಅವಕಾಶ ಕಲ್ಪಿಸಿರುವ ಕಾಲೇಜಿನಲ್ಲಿನ ದ್ವಿತೀಯ ಪಿಯುಸಿ ವಾರ್ಷಿಕ ಫಲಿತಾಂಶವು ಶೇಕಡ 40ಕ್ಕಿಂತ ಕಡಿಮೆ ಇತರಕ್ಕದ್ದಲ್ಲ ಹಾಗೂ ಸದರಿ ವಿಷಯಕ್ಕೆ ನಿಗಧಿತ ಕಾರ್ಯಭಾರ ಇರಬೇಕು.<br>3. ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 136 ಟಿಪಿಯು 1999, ದಿ:09.10.2006ರಲ್ಲಿ ಖಾಸಗಿ ಅನುದಾನಿತ ಪದವಿ ಪೂರ್ವ ಕಾಲೇಜುಗಳ ನಿಯಮಗಳು ಜಾರಿಗೆ ಬಂದಿರುತ್ತವೆ. ತೆರವಾದ ಹುದ್ದೆಗಳನ್ನು ತುಂಬಲು 2006ರ ನಿಯಮ–17ರಂತೆ ನೇಮಕಾತಿ ಪ್ರಕ್ರಿಯೆಯನ್ನು ಕೈಗೊಳ್ಳುವುದು.<br>4. ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 35 ಡಿಜಿಓ 2009, ದಿ:29.05.2014ರ ಇಲಾಖೆಯ ಪರಿಷ್ಕೃತ ವೃಂದ ಮತ್ತು ನೇಮಕಾತಿ ನಿಯಮಗಳ ಅನ್ವಯ ನಿಗಧಿತ ವಿದ್ಯಾರ್ಹತೆ, ವಯೋಮಿತಿ ಹಾಗೂ ನೇಮಕಾತಿಗಳಿಗೆ (ನೇರ ಹಾಗೂ ಬಡ್ತಿ) ಸಂಬಂಧಿಸಿದಂತೆ ಪ್ರಸ್ತಾಪಿಸಿರುವ ವಿಧಾನವನ್ನು ಅನುಸರಿಸುವುದು.<br>5. ಕರ್ನಾಟಕ ಪದವಿ ಪೂರ್ವ ಶಿಕ್ಷಣ (ಶೈಕ್ಷಣಿಕ, ನೋಂದಣಿ, ಆಡಳಿತ ಮತ್ತು ಅನುದಾನ ಇತ್ಯಾದಿ) (ತಿದ್ದುಪಡಿ) ನಿಯಮಗಳು 2017 ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 107 ಟಿಪಿಯು 2017, ದಿ:27.09.2018 ರಿಂದ ಜಾರಿಗೆ ಬಂದಿರುತ್ತದೆ. ಮೇಲಿನಗ ನಿಯಮದಂತೆ ಬೋಧಕ ಹುದ್ದೆಗೆ ಪ್ರಾಯೋಗಿಕ ರಹಿತ ವಿಷಯಕ್ಕೆ 20 ಅವಧಿಗಳು ಮತ್ತು ಪ್ರಾಯೋಗಿಕ ಸಹಿತ ವಿಷಯಗಳಿಗೆ 24 ಅವಧಿಗಳ ಕಾರ್ಯಭಾರವನ್ನು ನಿಗಧಿಪಡಿಸಿದೆ. ಸರ್ಕಾರದ ಆದೇಶದ ಸಂಖ್ಯೆ:ಸಿಆಸುಇ 08 ಸಹಿಮ 95, ದಿ:20.06.1995 ಮತ್ತು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 53 ಸೇನೇನಿ 2007, ದಿ:04.01.2008ರಲ್ಲಿನ ಸರ್ಕಾರದ ಮೀಸಲಾತಿ ಮತ್ತು ಸಮತಳ ಮೀಸಲಾತಿ ನಿಯಮಗಳನ್ನು ಪಾಲಿಸಿ ಹುದ್ದೆಗಳನ್ನು ತುಂಬಲು ಅನುಮತಿ ಕೋರುವುದು. |

<table>
<tr>
<td></td>
<td></td>
<td>ನಂತರ ಇಲಾಖೆಯು ಸದರಿ ಪ್ರಸ್ತಾವನೆಗಳನ್ನು ನಿಯಮಾನುಸಾರ ಪರಿಶೀಲಿಸಿ ಹುದ್ದೆ ಭರ್ತಿ ಮಾಡಲು ಸಂಬಂಧಿಸಿದ ಆಡಳಿತ ಮಂಡಳಿಗಳಿಗೆ ಅನುಮತಿ ನೀಡಲಾಗುತ್ತಿದೆ.<br>ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 61 ಎಸ್‌ಎಂಸಿ 2009, ದಿ:03.09.2010ರಲ್ಲಿ ಭಾಷಾ ಅಲ್ಪಸಂಖ್ಯಾತರ (Linguistic Minority Institutions) ಅನುದಾನಿತ ಶಾಲೆಗಳಲ್ಲಿ ಮೀಸಲಾತಿ ನಿಯಮಗಳನ್ನು ಅಳವಡಿಸತಕ್ಕದೆಂದಯ ನಿರ್ಣಯಿಸಿರುವ ಹಿನ್ನೆಲೆಯಲ್ಲಿ ಭಾಷಾ ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಗಳು ಕಡ್ಡಾಯವಾಗಿ ಮೀಸಲಾತಿ ನಿಯಮಗಳನ್ನು ಪಾಲಿಸತಕ್ಕದೆಂದು ಸರ್ಕಾರವು ತೀರ್ಮಾನಿಸಿದೆ.<br>ಪ್ರಸ್ತುತ ಭಾಷಾ ಅಲ್ಪಸಂಖ್ಯಾತ ಪದವಿ ಪೂರ್ವ ಕಾಲೇಜುಗಳಲ್ಲಿ ಹುದ್ದೆಗಳು ಈ ಕೆಳಗಿನಂತೆ ಖಾಲಿ ಇವೆ.
<table>
<tr><th>ಕ್ರ.ಸಂ</th><th>ಜಿಲ್ಲೆಯ ಹೆಸರು</th><th>ಖಾಲಿ ಬೋಧಕ ಹುದ್ದೆಗಳ ಸಂಖ್ಯೆ</th></tr>
<tr><td>1.</td><td>ಬೆಳಗಾವಿ</td><td>18</td></tr>
<tr><td>2.</td><td>ವಿಜಯಪುರ</td><td>17</td></tr>
<tr><td>3.</td><td>ಬಾಗಲಕೋಟೆ</td><td>–</td></tr>
</table>
</td>
</tr>
<tr>
<td>(ಆ)</td>
<td>ಈ ರೋಸ್ಟರ್ ನಿಯಮಾವಳಿಗಳ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಸಾಧ್ಯವಾಗದೇ ರೋಸ್ಟರ್ ನಿಯಮಾವಳಿಗಳಲ್ಲಿ ವಿನಾಯಿತಿಯನ್ನು ನೀಡುವಂತೆ ಬೇಡಿಕೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಬಂದಿದ್ದಲ್ಲಿ ಯಾವ ಯಾವ ವಿನಾಯಿತಿಗಳನ್ನು ನೀಡಲು ಸರ್ಕಾರ ಮುಂದಾಗಿದೆ?</td>
<td>ಸಂವಿಧಾನದ ಕಲಂ 14ರಂತೆ ಸರ್ಕಾರವು ಸಾಮಾಜಿಕ ನ್ಯಾಯಕ್ಕಾಗಿ ಭಾಷಾ ಅಲ್ಪಸಂಖ್ಯಾತರ (Linguistic Minority Institutions) ಅನುದಾನಿತ ಶಾಲೆಗಳಲ್ಲಿ ಮೀಸಲಾತಿ ನಿಯಮಗಳನ್ನು ಅಳವಡಿಸತಕ್ಕದೆಂದು ನಿರ್ಣಯಿಸಿದೆ.</td>
</tr>
<tr>
<td>(ಇ)</td>
<td>ಈ ನಿಯಮಾವಳಿಗಳಿಗೆ ವಿನಾಯಿತಿ ನೀಡುವ ಬಗ್ಗೆ ಈ ಹಿಂದೆ ಸದನದಲ್ಲಿ ಭರವಸೆ ನೀಡಲಾಗಿತ್ತೇ ನೀಡಿದ್ದರೆ, ಈವರೆವಿಗೂ ಯಾವ ಕಾರಣಕ್ಕಾಗಿ ವಿನಾಯಿತಿ ನೀಡಿ ಅದೇಶ ಹೊರಡಿಸಿ</td>
<td>ಕಡತ ಸಂಖ್ಯೆ: ಇಡಿ 33 ಎಸ್‌ಎಂಸಿ 2012 ರಲ್ಲಿ ಭಾಷಾ ಅಲ್ಪ ಸಂಖ್ಯಾತ ಶಾಲೆಗಳಲ್ಲಿ ಮೀಸಲಾತಿಯನ್ನು ಪಾಲಿಸುವ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:9744/2012ರ ದಿನಾಂಕ:28/10/2013ರ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 6</td>
</tr>
</table>

| | | |
|---|---|---|
| | ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ಕೈಗೊಂಡಿರುವುದಿಲ್ಲ; (ಪ್ರಸ್ತಾವನೆಯ ಸಂಪೂರ್ಣ ಮಾಹಿತಿ ಒದಗಿಸುವುದು) | ಎಸ್‌ಎಂಸಿ 2009 ದಿನಾಂಕ:03/09/2010ರಲ್ಲಿ ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯೆಂದು ಘೋಷಿಸುವ ಸಂದರ್ಭದಲ್ಲಿ ರೋಸ್ಟರ್ ಪದ್ಧತಿ ಪಾಲಿಸುವ ಷರತ್ತು ವಿಧಿಸಿರುವುದನ್ನು ರದ್ದುಗೊಳಿಸಿರುವುದರಿಂದ ಮಾನ್ಯ ಉಚ್ಚ ನ್ಯಾಯಾಲಯದ ಆದೇಶವನ್ನು ಪಾಲನೆ ಮಾಡುವ ಬಗ್ಗೆ ಸಿಆಸುಇ(ಸೇವಾ ನಿಯಮಗಳು) ಅಭಿಪ್ರಾಯವನ್ನು ಕೋರಲಾಗಿದ್ದು, ನಿರೀಕ್ಷಿಸಲಾಗುತ್ತಿದೆ. |
| (ಈ) | ಈ ಪ್ರಾಥಮಿಕ, ಪ್ರೌಢ ಶಾಲೆಗಳಲ್ಲಿ ಶಿಕ್ಷಕ ಮಕ್ಕಳ ಸಂಖ್ಯೆಯ ಅನುಪಾತ ಎಷ್ಟು; ಈ ನಿಯಮಾವಳಿಗಳಿಂದ ಈ ಶಿಕ್ಷಣ ಸಂಸ್ಥೆಗಳಿಗೆ ಅನ್ಯಾಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಭಾಷಿಕ/ಧಾರ್ಮಿಕ ಅಲ್ಪಸಂಖ್ಯಾತ ಶಾಲೆಗಳಲ್ಲಿ ತಾರತಮ್ಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಇದನ್ನು ಸರಿಪಡಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | The Karnataka Educational institutions (Recruitment and terms and conditions of service of employees in Private Aided Primary and Secondary Educational Institutions) Rules. 1999 ಅನುಬಂಧ –5ರ ಪ್ರಾಥಮಿಕ ಶಾಲೆಗಳಲ್ಲಿ 1:40 ಪ್ರಕಾರ ಶಿಕ್ಷಕರನ್ನು ಅನುದಾನಕ್ಕೆ ಒಳಪಡಿಸಲಾಗುತ್ತಿದೆ.<br>ಪ್ರೌಢ ಶಾಲೆಗಳಲ್ಲಿ ಒಂದು ವಿಭಾಗಕ್ಕೆ 70 ವಿದ್ಯಾರ್ಥಿಗಳ ಸಂಖ್ಯೆಯನ್ನು ನಿಗಧಿಪಡಿಸಲಾಗಿದೆ. ಆದರೆ ಶಿಕ್ಷಕರ ಅನುಪಾತವನ್ನು ಸಿಬ್ಬಂಧಿ ಮಾದರಿ ರಚನೆಯಂತೆ ಪ್ರತಿ ಮೂರು ವಿಭಾಗಳನ್ನು(8.9 ಮತ್ತು 10ನೇ ತರಗತಿ) ಹೊಂದಿರುವ ಶಾಲೆಗಳಿಗೆ 6+1 ಶಿಕ್ಷಕರನ್ನು ನಿಗಧಿಗೊಳಿಸಲಾಗಿದೆ. 6 ವಿಭಾಗಗಳನ್ನು ಹೊಂದಿರುವ ಶಾಲೆಗೆ ಪ್ರತಿ ವಿಭಾಗಕ್ಕೆ 1.5 ರ ಅನುಪಾತದಲ್ಲಿ ಶಿಕ್ಷಕರನ್ನು ನೇಮಕ ಮಾಡಿಕೊಳ್ಳಲಾಗುತ್ತಿದೆ. ಈ ನಿಯಮವು ಭಾಷಾ ಮತ್ತು ಧಾರ್ಮಿಕ ಅಲ್ಪಸಂಖ್ಯಾತ ಶಾಲೆಗಳಿಗೂ ಅನ್ವಯವಾಗುತ್ತದೆ. ಭಾಷಿಕ /ಧಾರ್ಮಿಕ ಅಲ್ಪಸಂಖ್ಯಾತ ಶಾಲೆಗಳಲ್ಲಿ ತಾರತಮ್ಯದ ಬಗ್ಗೆ ಯಾವುದೇ ದೂರುಗಳು ಬಂದಿರುವುದಿಲ್ಲ. |

(ಎಸ್.ಸುರೇಶ್‌ಕುಮಾರ್)

**ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**

ಇಪಿ 4 ಪಿಡಿಬಿ 2021